೩|೦

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 651(717)

ಸದಸ್ಯರ ಹೆಸರು : ಶ್ರೀ ವಿಜಯಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ದಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 05-03-2021

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕ ಭಾಗದಲ್ಲಿ ಅತಿ ಹೆಚ್ಚು ಮಂದಿ ಅಪೌಷ್ಠಿಕತೆಯಿಂದ ಬಳಲುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ಜಿಲ್ಲಾವಾರು ಮಾಹಿತಿ ನೀಡುವುದು.) | ಹೌದು.<br><br>ಅಪೌಷ್ಠಿಕತೆಯನ್ನು ಹೋಗಲಾಡಿಸಲು ರಾಜ್ಯದಲ್ಲಿ ಎಲ್ಲಾ ಜಿಲ್ಲೆಗಳನ್ನೊಳಗೊಂಡಂತೆ ಸರ್ಕಾರವು ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಈ ಕೆಳಕಂಡಂತಿದೆ.<br><br>1) ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ಸಾಮಾನ್ಯ ಮಕ್ಕಳಿಗೆ ಪ್ರತೀ ದಿನ ರೂ.8.00 ರಂತೆ ಘಟಕ ವೆಚ್ಚ ಭರಿಸುತ್ತಿದ್ದು, ತೀವ್ರ ಅಪೌಷ್ಠಿಕತೆಯುಳ್ಳ ಮಕ್ಕಳಿಗೆ ರೂ.12.00ರ ಪೂರಕ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ.<br>2) 3 ರಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br>3) 6 ತಿಂಗಳಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 5 ದಿನ ಕೆನೆಭರಿತ ಹಾಲನ್ನು ನೀಡಲಾಗುತ್ತಿದೆ.<br>4) ತೀವ್ರ ಅಪೌಷ್ಠಿಕ ಮಕ್ಕಳಿಗೆ ಹೆಚ್ಚುವರಿಯಾಗಿ ವಾರದಲ್ಲಿ 3 ದಿನ ಹಾಲು ಮತ್ತು 3 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ. ಮೊಟ್ಟೆಯನ್ನು ಉಪಯೋಗಿಸದ ಮಕ್ಕಳಿಗೆ ವಾರದಲ್ಲಿ 6 ದಿನ ಹಾಲನ್ನು ನೀಡಲಾಗುತ್ತಿದೆ.<br>5) ಹಿಂದುಳಿದ 5 ಜಿಲ್ಲೆಗಳಾದ ಕಲ್ಬುರ್ಗಿ, ಬೀದರ್, ರಾಯಚೂರು, ಕೊಪ್ಪಳ ಹಾಗೂ ಯಾದಗಿರಿ ಜಿಲ್ಲೆಗಳ ಸಾಧಾರಣ ಅಪೌಷ್ಠಿಕ ಮಕ್ಕಳಿಗೆ ಹೆಚ್ಚುವರಿಯಾಗಿ ವಾರದಲ್ಲಿ 3 ದಿನ ಮೊಟ್ಟೆ, 200 ಎಂ.ಎಲ್. ಕೆನೆಭರಿತ ಹಾಲನ್ನು ನೀಡಲಾಗುತ್ತಿದೆ.<br>6) ತೀವ್ರ ಅಪೌಷ್ಠಿಕ ಮಕ್ಕಳಿಗೆ ವೈದ್ಯಕೀಯ ವೆಚ್ಚ ಯೋಜನೆಯಡಿ ಔಷಧಿ ಹಾಗೂ ಚಿಕಿತ್ಸಾ ಆಹಾರಕ್ಕಾಗಿ (ಥೆರಪೆಟಿಕ್ ಫುಡ್) ಪ್ರತಿ ಮಗುವಿಗೆ ವಾರ್ಷಿಕ ರೂ.2,000/- ಗಳಂತೆ ವೆಚ್ಚ ಭರಿಸಲಾಗುತ್ತಿದೆ.<br>7) ಆರೋಗ್ಯ ಇಲಾಖೆಯ ಸಹಯೋಗದೊಂದಿಗೆ ಪೌಷ್ಠಿಕ ಪುನರ್ವಸತಿ ಕೇಂದ್ರ (ಎನ್.ಆರ್.ಸಿ.) ಗಳಲ್ಲಿ ಅಪೌಷ್ಠಿಕ ಮಕ್ಕಳಿಗೆ ಚಿಕಿತ್ಸೆ ನೀಡಲಾಗುತ್ತಿದೆ. |

| | | |
|---|---|---|
| ಆ) | ಕಳೆದ ಮೂರು ವರ್ಷಗಳಿಂದ ಕಲ್ಯಾಣ ಕರ್ನಾಟಕ ಭಾಗದಲ್ಲಿ ಅಪೌಷ್ಠಿಕತೆಯನ್ನು ನಿವಾರಿಸಲು ಸರ್ಕಾರ ಬಿಡುಗಡೆ ಮಾಡಿದ ಅನುದಾನ ಎಷ್ಟು? (ಜಿಲ್ಲಾವಾರು ಮಾಹಿತಿ ನೀಡುವುದು.) | ಕಲ್ಯಾಣ ಕರ್ನಾಟಕ ಭಾಗದಲ್ಲಿ ಅಪೌಷ್ಠಿಕತೆಯನ್ನು ನಿವಾರಿಸಲು ಸರ್ಕಾರವು ಕಳೆದ 3 ವರ್ಷಗಳಲ್ಲಿ ಬಿಡುಗಡೆ ಮಾಡಿರುವ ಅನುದಾನದ ವಿವರ ಈ ಕೆಳಕಂಡಂತಿದೆ. |

| ಕ್ರ. ಸಂ. | ಜಿಲ್ಲೆಯ ಹೆಸರು | ಕಳೆದ 3 ವರ್ಷಗಳಲ್ಲಿ ಬಿಡುಗಡೆ ಮಾಡಿದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1 | ಕಲ್ಬುರ್ಗಿ | 32765.48 |
| 2 | ಬೀದರ್ | 31234.95 |
| 3 | ರಾಯಚೂರು | 28017.94 |
| 4 | ಬಳ್ಳಾರಿ | 19456.12 |
| 5 | ಯಾದಗಿರಿ | 16566.03 |
| 6 | ಕೊಪ್ಪಳ | 18538.54 |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ,
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ: ಮಮಇ 66 ಐಸಿಡಿ 2021